# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್:114

6ನೇ ವರ್ಷ 32ನೇ ಸಂಚಿಕೆ ಕೊಪ್ಪ 6-3-1988 ಭಾನುವಾರ ಬೆಲೆ 50 ಪೈಸೆ


## ವಂಚಕರಿದ್ದಾರೆ, ಎಚ್ಚರಿಕೆ !

(ವರದಿ : ಕೃಷ್ಣ ಭಂಡಾರಿ)

ಜಯಪುರ: ಸಮೀಪದ ಮೇಗೂರಿನ ಸತ್ತಿಕಲ್ಲು ನಿವಾಸಿ ಶ್ರೀನಿವಾಸಯ್ಯ ಎಂಬ ಮುಗ್ಧ ರೈತರು ಶಿವಮೊಗ್ಗದಲ್ಲಿ ಅಡಿಕೆ ಮಾರಿ ಗಳಿಸಿದ 3000 ರೂ.ಗಳನ್ನು ವಂಚಕನೊಬ್ಬನ ಕೈಗೆ ಹಾಕಿ 'ಕೈ ತೊಳೆದುಕೊಂಡ' ದುಃಖದ ಸಂಗತಿ ಬೆಳಕಿಗೆ ಬಂದಿದೆ.

**ಗಂಟು ಬಿದ್ದ ದೋಸ್ತಿ**

ಮಂಡಿಯಲ್ಲಿ ಅಡಿಕೆ ಮಾರಿ ಹಣ ತೆಗೆದುಕೊಂಡು ಹೊರಬಂದಾಗ ಹೊಸ ಗೆಳೆಯನೊಬ್ಬ ಶ್ರೀನಿವಾಸಯ್ಯನಿಗೆ ಗಂಟು ಬಿದ್ದ. ಕಷ್ಟ-ಸುಖ ವಿಚಾರಿಸಿದ. ಆತ ಯಾರೆಂದು ಖಚಿತವಾಗಿ ಇವರಿಗೆ ಗುರುತಾಗದಿದ್ದರೂ, ಪರ ಊರಲ್ಲಿ ಗೆಳೆಯನೊಬ್ಬ ಸಿಕ್ಕಿದ್ದಕ್ಕೇ ಇವರಿಗೆ ಸಂತೋಷವಾಗಿ, ತಮ್ಮ ನಿರುದ್ಯೋಗಿ ಮಗನ ಬಗ್ಗೆ ಹೇಳಿಕೊಂಡರು; ಈ 3000 ರೂ ಕರಿಮನೆ ಬ್ಯಾಂಕಿನ ಸಾಲಕ್ಕೆ ಕಟ್ಟಬೇಕು ಎಂದರು.

**ಉದ್ಯೋಗದಾತ**

ಕೂಡಲೇ ಚುರುಕಾದ ಆತ, "ಅಯ್ಯೋ ಸ್ವಾಮಿ. ನಾನೂ ಕರಿಮನೆ ಬ್ಯಾಂಕಿನಲ್ಲೇ ಆಫೀಸರ್ ಆಗಿದ್ದೇನೆ. ನಿಮಗೆ ನನ್ನ ಗುರುತು ಸಿಗಲಿಲ್ವೆ?" ಎಂದ. 'ಛೆ, ನಾನು ಇಷ್ಟು ಸಲ ಬ್ಯಾಂಕಿಗೆ ಹೋದರೂ ಇವರನ್ನು ಗುರುತಿಸಲಿಲ್ಲವಲ್ಲ' ಎಂದು ಪೆಚ್ಚಾದ ಶ್ರೀನಿವಾಸಯ್ಯನಿಗೆ ಈತ ಹೇಳಿದ— 'ನಾಳೆ ಬ್ಯಾಂಕಿಗೆ ಬನ್ನಿ. ಸದ್ಯ ಒಂದು ಹುದ್ದೆ ಖಾಲಿ ಇದೆ. ಖಂಡಿತ ನಿಮ್ಮ ಮಗನಿಗೆ ಕೊಡಿಸುತ್ತೇನೆ....' ಶ್ರೀನಿವಾಸಯ್ಯನಿಗೆ ಸ್ವರ್ಗಕ್ಕೆ ಮೂರೇ ಗೇಣು ಉಳಿದಿತ್ತು.

**ಹಣಕ್ಕೊಂದು ಕವರ್**

'ಹಣ ಎಲ್ಲಿಟ್ಟಿದ್ದೀರಿ?' ಎಂದು ಅವನು ಕೇಳಿದಾಗ ಬ್ಯಾಗಿನಲ್ಲಿ ತೋರಿಸಿದರು. "ಛೆ ಛೆ, ಹಾಗೆಲ್ಲ ಇಟ್ಕೊಳ್ತಾರಾ? ಇಲ್ಲಿ ಕೊಡಿ, ಕವರಿಗೆ ಹಾಕಿಕೊಡ್ತೇನೆ" ಅಂದ. ಕೊಟ್ಟರು. ಅಲ್ಲೇ ಅಂಗಡಿಯಲ್ಲಿ ಕವರ್ ಕೊಂಡು ಅದರಲ್ಲಿ ಹಾಕಿ ಮಡಿಸಿ ಕೊಟ್ಟ.

ಶಿವಮೊಗ್ಗದಿಂದ ಮನೆಗೆ ತೇಲಿಕೊಂಡೇ ಬಂದ ಶ್ರೀನಿವಾಸಯ್ಯ ಮರುದಿನ ಸಾಲದ ಹಣ ಕಟ್ಟಿ ಮಗನಿಗೆ ಕೆಲಸ ಕೊಡಿಸಲು ಬ್ಯಾಂಕಿಗೆ ಹೋಗಿ ಆಫೀಸರ್ ಬಗ್ಗೆ ಕೇಳಿದರು. ಇಲ್ಲಿ ಯಾವ ಆಫೀಸರೂ ಇಲ್ಲ ಎಂದ ಕಾರ್ಯದರ್ಶಿ, ಕೇಶವಮೂರ್ತಿಯವರಿಗೆ ಇವರೆಲ್ಲೋ ಮೋಸ ಹೋದ ಶಂಕೆ ಮೂಡಿತು.

**ಪಂಗನಾಮ !**

ಸಾಲದ ಹಣ 3000ಕ್ಕೆ ರಸೀದಿ ಹಾಕಿ

(4ನೇ ಪುಟಕ್ಕೆ)

# ಅಣ್ಣ ತಮ್ಮಂದಿರ ಜಗಳ — ಅಣ್ಣನ ಭೀಕರ ಕೊಲೆಯಲ್ಲಿ ಮುಕ್ತಾಯ

(ನಮ್ಮ ಪ್ರತಿನಿಧಿಯಿಂದ)

**ಜಯಪುರ : ಇಲ್ಲಿಗೆ ಸಮೀಪದ ಆರದಾಳು ಎಂಬಲ್ಲಿ ಅಣ್ಣತಮ್ಮಂದಿರ ನಡುವೆ ಕೆಲವು ಕಾಲದಿಂದ ಹೊಗೆಯಾಡುತ್ತಿದ್ದ ಜಗಳವೊಂದು ಅಣ್ಣನ ಭೀಕರ ಕೊಲೆಯಲ್ಲಿ ಪರ್ಯವಸಾನಗೊಂಡಿದೆ.**

ಹಿರಿಯರ ಅಲ್ಪಸ್ವಲ್ಪ ಆಸ್ತಿಯನ್ನು ಕೆಲವು ವರ್ಷಗಳ ಹಿಂದೆ ಪಾಲು ಮಾಡಿಕೊಂಡು ಜೀವಿಸುತ್ತಿದ್ದ ಸುಧಾಕರ ಮತ್ತು ಪುಟ್ಟಪ್ಪ ಎಂಬ ಅಣ್ಣ ತಮ್ಮಂದಿರ ನಡುವೆ ಈ ಹಿಂದೆ ಹಲವು ಬಾರಿ ಜಗಳವಾಗಿ ಪಂಚಾತಿಕೆಗಳೂ ನಡೆದಿದ್ದುವೆನ್ನಲಾಗಿದೆ.

ಫೆ. 28ರಂದು ಪುಟ್ಟಪ್ಪನ ತರಕಾರಿ ಹಿತ್ತಿಲಿಗೆ ಅಣ್ಣನ ದನ ನುಗ್ಗಿ ಮೇಯ್ದ ಬಗ್ಗೆ ಪುಟ್ಟಪ್ಪನಿಗೂ ಅತ್ತಿಗೆಗೂ ಜಗಳವಾಗಿ, ರಾತ್ರಿ ಕುಡಿದು ಬಂದಿದ್ದ ಸುಧಾಕರ ಹೆಂಡತಿಯ ಮಾತಿನಿಂದ ಕೆರಳಿ ಪುಟ್ಟಪ್ಪನಿಗೆ 'ಬುದ್ಧಿ ಕಲಿಸಲು' ಕತ್ತಿ ಹಿಡಿದುಕೊಂಡು ಹೋಗಿ, ಹೊಂಚು ಹಾಕುತ್ತಿದ್ದನೆನ್ನಲಾಗಿದೆ.

ಈ ಹಿಂದೆ ಹಲವು ಬಾರಿ ಅಣ್ಣನಿಂದ ಹೊಡೆತ ತಿಂದಿದ್ದ ಪುಟ್ಟಪ್ಪ ಈ ಬಾರಿ ತಾನೂ ಒಂದು ಮಚ್ಚುಗತ್ತಿ ಹಿಡಿದು ಹಿಂದಿನಿಂದ ಅಣ್ಣನ ಮೇಲೆ ಎರಗಿ, ಅವನನ್ನು ಕಡಿದು ಕಡಿದು, ಕೊಚ್ಚಿಹಾಕಿ ತಲೆ ತಪ್ಪಿಸಿಕೊಂಡನು.

ಒಂದು ಹೆಣ್ಣು, ಒಂದು ಗಂಡು ಮಕ್ಕಳ ತಂದೆ, 35ರ ಪ್ರಾಯದ ಸುಧಾಕರ ಸ್ಥಳದಲ್ಲೇ ಅಸು ನೀಗಿದ್ದು, ವಿಷಯ ತಿಳಿದೊಡನೆ ಕೊಪ್ಪದ ಇನ್‌ಚಾರ್ಜ್ ಸಬ್‌ಇನ್‌ಸ್ಪೆಕ್ಟರ್ ಶಾಮಾನಾಯ್ಕ್, ಸಿಪಾಯಿ ಲಿಂಗಣ್ಣಯ್ಯ ಇವರುಗಳು ಸ್ಥಳಕ್ಕೆ ಭೇಟಿ ನೀಡಿ ಮಹಜರು ನಡೆಸಿ, ಪ್ರಕರಣ ದಾಖಲು ಮಾಡಿಕೊಂಡರು.

ಎಸ್ಪಿ ಓಂಪ್ರಕಾಶ್, ತರೀಕೆರೆ ಡಿವೈಎಸ್ಪಿ ರವೀಂದ್ರಪ್ರಸಾದ್ ಫೆ 29ರಂದು ಸ್ಥಳಕ್ಕೆ ಭೇಟಿ ನೀಡಿದ್ದರು. ಇನ್‌ಚಾರ್ಜ್ ಸರ್ಕಲ್ ಇನ್ಸ್‌ಪೆಕ್ಟರ್ ಎಚ್.ಟಿ. ದುಗ್ಗಪ್ಪ ತನಿಖೆ ಮುಂದುವರಿಸಿದ್ದಾರೆ.

ಆರೋಪಿ ಪುಟ್ಟಪ್ಪ (30) ಮಾ. 2ರಂದು ಶೃಂಗೇರಿ ಪೋಲೀಸರಿಗೆ ಶರಣಾಗಿದ್ದು, ಅವನನ್ನು ನ್ಯಾಯಾಂಗ ಬಂಧನಕ್ಕೊಳಪಡಿಸಲಾಗಿದೆ.

## ರಸ್ತೆ ಮಂಜೂರಾತಿ ಬಗ್ಗೆ ಕೃತಜ್ಞತೆ

ಜಯಪುರ: ಇಲ್ಲಿಗೆ ಸಮೀಪದ ಗುಡ್ಡೇತೋಟ-ಹುಲಿಗರಡಿ ಮಧ್ಯೆ ಗಿರಿಜನಾಭಿವೃದ್ಧಿ ಯೋಜನೆಯಡಿ ಹೊಸ ರಸ್ತೆಗಾಗಿ 3. 25 ಲಕ್ಷ ರೂ. ಮಂಜೂರಾಗಿದ್ದು, ಹುಲಿಗರಡಿಯ ಕಡೆಯಿಂದ ಈಗಾಗಲೇ ಕಾಮಗಾರಿ ಆರಂಭವಾಗಿದೆ. ಮೂರೂಕಾಲು ಕಿ. ಮೀ. ರಸ್ತೆ ನಿರ್ಮಾಣ ಮತ್ತು ಜಲ್ಲಿ ಕೆಲಸ ಆಗಲಿದೆ.

ಕೇಂದ್ರ ಸರ್ಕಾರದ ಈ ಕಾಮಗಾರಿ ಮಂಜೂರಾತಿಗಾಗಿ ಶ್ರಮಿಸಿದ ಶಾಸಕರು, ಜಿಲ್ಲಾ ಪರಿಷತ್ತು ಮತ್ತು ಸರ್ಕಾರಕ್ಕೆ ಹುಲಿಗರಡಿ ಗ್ರಾಮದ ಗಿರಿಜನರು ಕೃತಜ್ಞತೆ ಸಲ್ಲಿಸಿದ್ದಾರೆ.

(ವರದಿ: ಎಂ. ಆರ್. ಭಾಸ್ಕರ್)

## ಸಿದ್ಧರಮಠ-ಶೃಂಗೇರಿ ಹೊಸ ಬಸ್ ಸಂಚಾರ ಆರಂಭ

ಕೊಪ್ಪ: ಇಲ್ಲಿಗೆ ಸಮೀಪದ ಸಿದ್ಧರಮಠದಿಂದ ಕೊಪ್ಪ-ಉತ್ತಮೇಶ್ವರ ಮಾರ್ಗವಾಗಿ ಶೃಂಗೇರಿಗೆ ದಿನಕ್ಕೆ 2 ಬಾರಿ ಓಡಾಡುವ ಹೊಸ ಬಸ್ ಸಂಚಾರವೊಂದನ್ನು ಶಂಕರ್ ಸಂಸ್ಥೆ ಆರಂಭಿಸಿದೆ. ಸಿದ್ಧರಮಠದಿಂದ ಬೆಳಿಗ್ಗೆ 7 ಮತ್ತು ಮಧ್ಯಾಹ್ನ 2 ಗಂಟೆಗೆ, ಶೃಂಗೇರಿಯಿಂದ ಬೆಳಿಗ್ಗೆ 10.30 ಮತ್ತು ಸಂಜೆ 5 ಗಂಟೆಗೆ ಈ ಬಸ್ ಹೊರಡುತ್ತದೆ.

ಈ ಬಸ್ ಸಂಚಾರ ಆರಂಭಿಸಿದ್ದಕ್ಕಾಗಿ ಜಿಲ್ಲಾಧಿಕಾರಿಗಳಿಗೆ, ಸಾರಿಗೆ ಪ್ರಾಧಿಕಾರಕ್ಕೆ ಮತ್ತು ಶಂಕರ್ ಸಾರಿಗೆ ಸಂಸ್ಥೆಗೆ ಸಿದ್ಧರಮಠ ಮತ್ತು ಉತ್ತಮೇಶ್ವರ ಹಾಗೂ ಸುತ್ತಮುತ್ತಲ ಗ್ರಾಮಸ್ಥರು ಅತ್ಯಂತ ಕೃತಜ್ಞತೆ ಸಲ್ಲಿಸುತ್ತ ಈ ಮಾರ್ಗವನ್ನು ಖಾಯಂ ಮಾಡುವಂತೆ ಮನವಿ ಮಾಡಿದ್ದಾರೆ.

### ಸ್ತಬ್ಧಗೊಂಡ ಹೈನುಗಾರಿಕೆಗೆ ಜೀವದಾನವಾಗದೆ

# ತೀವ್ರ ಸಂಕಷ್ಟಕ್ಕೆ ಸಿಕ್ಕಿರುವ ಹಾಲು ಉತ್ಪಾದಕರು

**ಕೊಪ್ಪ : ಶೃಂಗೇರಿ, ಕೊಪ್ಪ, ನ. ರಾ. ಪುರ ತಾಲ್ಲೂಕುಗಳಲ್ಲಿ ಕಳೆದ ಮೂರು ತಿಂಗಳಿನಿಂದ ನಿಂತು ಹೋಗಿರುವ ಸಂಘಟಿತ ಹೈನುಗಾರಿಕೆ ಚಟುವಟಿಕೆಗೆ ಇನ್ನೂ ಜೀವದಾನವಾಗದೆ, ಹಾಲುತ್ಪಾದಕರ ಸಂಕಷ್ಟ ತೀವ್ರವಾಗುತ್ತಲೇ ನಡೆದಿದೆ.**

ಕಳೆದ ವರ್ಷ ಕೆಲವು ಕಡೆಗಳಲ್ಲಿದ್ದ ಹಾಲು ಉತ್ಪಾದಕರ ಸಂಘಗಳ ಪುನರ್‌ರಚನೆ ಮತ್ತು ಕೆಲವು ಹೊಸ ಸಂಘಗಳ ಸ್ಥಾಪನೆಯೊಂದಿಗೆ, ಮೊದಲು ದಿನಕ್ಕೆ ಒಂದು ಹೊತ್ತು, ಅನಂತರ ದಿನಕ್ಕೆ ಎರಡೂ ಹೊತ್ತು ಹಾಲಿನ ಸಂಗ್ರಹಣೆ ಹಾಸನ ಡೈರಿ ಒಕ್ಕೂಟದಿಂದ ನಡೆಯತೊಡಗಿತು.

ಆರ್ಥಿಕವಾಗಿ ಲಾಭದಾಯಕವಾಗುವ ಬೇರಾವುದೇ ಕೃಷಿ ಚಟುವಟಿಕೆಗೂ ಜಮೀನು ಬೇಕೇಬೇಕಿದ್ದರೆ, ಹೈನುಗಾರಿಕೆಯಲ್ಲಿ ಭೂರಹಿತರು ಕೂಡ ಪೂರ್ಣವಾಗಿ ತೊಡಗಿ ಪ್ರಯೋಜನ ಪಡೆದುಕೊಳ್ಳಬಹುದಾಗಿದ್ದು, ಮೇಲ್ಕಂಡ ಹಾಲು ಸಂಗ್ರಹಣೆ ಏರ್ಪಾಡನ್ನು ನಂಬಿ ಈ ಭಾಗದ ನೂರಾರು ಜನ ಬಡ ಕುಟುಂಬಗಳ ಮಹಿಳೆಯರು, ಭೂರಹಿತರು ಮತ್ತು ಸಾಮಾನ್ಯ ರೈತರು ಸಾಲ-ಸೋಲ ಮಾಡಿ ಹಸುಗಳನ್ನು ಸಾಕತೊಡಗಿದ್ದರು.

ಆದರೆ, ಹೈನುಗಾರಿಕೆಗೆ ಅತ್ಯಂತ ಉಪಯುಕ್ತ ವಾತಾವರಣವಿರುವುದೆನ್ನಲಾಗಿರುವ ಈ ಪ್ರದೇಶದಲ್ಲಿ ಹೈನುಗಾರಿಕೆ ಅಭಿವೃದ್ಧಿಗೆ ತೀರಾ ಅಸಡ್ಡೆಯನ್ನೇ ಪ್ರದರ್ಶಿಸುತ್ತ ಬಂದಿರುವ ಹಾಸನ ಡೈರಿ ಒಕ್ಕೂಟ, ಪ್ರತಿಹಂತದಲ್ಲೂ ಹಾಲುತ್ಪಾದಕರ ಮತ್ತು ರೈತರ ಪ್ರತಿಭಟನೆ ಚಳುವಳಿ ಬೆದರಿಕೆಗೆ ಮಾತ್ರ ಅಲ್ಪ ಸ್ವಲ್ಪ ಮನ್ನಣೆ ಕೊಡುತ್ತಿದ್ದು, ನಿಜವಾದ ಕಳಕಳಿಯ ಲವಲೇಶವನ್ನೂ ಹೊಂದಿಲ್ಲದಿರುವುದು ಎದ್ದು ಕಾಣುತ್ತಿದೆ

ಆದರೂ, ಹಾಲುತ್ಪಾದಕರು ಪದೇ ಪದೇ ಮಾಡಿದ ಒತ್ತಾಯಕ್ಕೆ ಪ್ರತಿಯಾಗಿ ಹಾಸನ ಡೈರಿ ಒಕ್ಕೂಟದ ವ್ಯವಸ್ಥಾಪಕ ನಿರ್ದೇಶಕರು ಹರಿಹರಪುರದ ಹಿರಿಯ ಪತ್ರಕರ್ತ ಎಚ್. ಎಸ್. ಸೀತಾರಾಮಯ್ಯನವರಿಗೆ ಬರೆದ ತಾ 21-1-88ರ ಪತ್ರದಲ್ಲಿ ಹೀಗೊಂದು ಭರವಸೆ ಕೊಟ್ಟಿದ್ದಾರೆ:

"ಬಾಳೆಹೊನ್ನೂರಿನಲ್ಲಿರುವ ಶೀತಲೀಕರಣ ಕೇಂದ್ರವು ಕೇವಲ 120 ಲೀಟರ್ ಹಾಲನ್ನು ಶೈತ್ಯೀಕರಿಸುವ ಸಾಮರ್ಥ್ಯ ಹೊಂದಿದೆ. ಈ ಕೇಂದ್ರಕ್ಕೆ ಒಟ್ಟು 7 ಕೇಂದ್ರಗಳ ಹಾಲುತ್ಪಾದಕರ ಸಂಘಗಳಿಂದ ಪ್ರತಿ ದಿನ ಸರಾಸರಿ 300-350 ಲೀ.ನಷ್ಟು ಹಾಲು ಸಂಗ್ರಹಣೆಯಾಗುತ್ತಿದ್ದು, ಈ ಹಾಲನ್ನು ಶೈತ್ಯೀಕರಿಸಿ ಹಾಸನ ಡೈರಿ [illegible] ವೇಳೆಗೆ ಹುಳಿಯಾಗಿ, ಕೆಲವೊಮ್ಮೆ [illegible] ರಾಗಿ ಬರುತ್ತಿತ್ತು. ಇದರಿಂದ ಒಕ್ಕೂಟಕ್ಕೆ ಪ್ರತಿ ತಿಂಗಳೂ ಒಂದರಿಂದ ಒಂದೂವರೆ ಲಕ್ಷ ರೂ. ನಷ್ಟ ಸಂಭವಿಸುತ್ತಿತ್ತು... 300 ಲೀಟರ್ ಹಾಲನ್ನು [illegible] ಸಾಗಿಸಲು ಮತ್ತು [illegible]

([illegible])

# ಮೆಳ್ಳಗಣ್ಣು - ಚಿಕಿತ್ಸೆ ಲಭ್ಯ

ಕಳೆದ ವರ್ಷದಲ್ಲಿ ಎರಡು ಬಾರಿ ನಡೆದ ಸಂಗತಿ ಇದು. ಬೇರಾವುದೋ ತೊಂದರೆಯ ಚಿಕಿತ್ಸೆಗೆಂದು ತಮ್ಮ ಮಕ್ಕಳನ್ನು ತಾಯಿಯವರು ಕರೆ ತಂದಿದ್ದಾಗ ಮಕ್ಕಳಿಗೆ ಮೆಳ್ಳಗಣ್ಣಿದ್ದುದು ಕಂಡುಬಂತು. ಈ ಸ್ಥಿತಿಯನ್ನು ತಾಯಿಂದಿರ ಗಮನಕ್ಕೆ ತಂದಾಗ, ಅದು ಅದೃಷ್ಟದ ಸಂಕೇತವಾದುದರಿಂದ ಯಾವ ಕ್ರಮವನ್ನೂ ಕೈಗೊಳ್ಳದೆ ಇದ್ದೇವೆಂಬ ಭಾವವನ್ನು ವ್ಯಕ್ತಪಡಿಸಿದರು. ಮೆಳ್ಳಗಣ್ಣನ್ನು ಸೂಕ್ತ ಚಿಕಿತ್ಸೆಯ ಮೂಲಕ ಎಳೆಯ ವಯಸ್ಸಿನಲ್ಲಿ ಗುಣಪಡಿಸಲು ಸಾಧ್ಯವೆಂಬ ಸಂಗತಿಯನ್ನು ಹೇಳಿ, ಈ ಬಗ್ಗೆ ಆದಷ್ಟು ಬೇಗ ನೇತ್ರ ತಜ್ಞರ ಸಲಹೆ ಪಡೆಯಲು ಸೂಚಿಸಿದೆ.

ಸಾಧಾರಣವಾಗಿ ನಮ್ಮ ನಾಡಿನಲ್ಲಿ ಮೆಳ್ಳಗಣ್ಣು ಅದೃಷ್ಟದ ಸಂಕೇತವೆಂದು ಈ ಬಗ್ಗೆ ಯಾವುದೇ ಕ್ರಮ ಕೈಗೊಳ್ಳದಿರುವುದು ಎಲ್ಲೆಡೆ ಕಂಡುಬರುವ ಸಂಗತಿ.

ಮಾಲುಗಣ್ಣು ಅಥವಾ ಮೆಳ್ಳಗಣ್ಣು ಎಂದಾಗಿ ಕರೆಯಲ್ಪಡುವ ಕಣ್ಣಿನ ತೊಂದರೆಯು ದೃಷ್ಟಿಯಲ್ಲಿನ ತೊಂದರೆಗಿಂತ ಮುಖ್ಯವಾಗಿ ವ್ಯಕ್ತಿಯ ಮುಖ ಲಕ್ಷಣವನ್ನು ಬದಲಿಸುತ್ತದೆ. ಈ ಸ್ಥಿತಿಯು ತೀವ್ರ ಸ್ವರೂಪದ್ದಾದಲ್ಲಿ ವ್ಯಕ್ತಿಯಲ್ಲಿ ಕೀಳರಿಮೆ ಬರಲೂ ಕೂಡ ಕಾರಣವಾಗಬಹುದು. ಕೆಲವೊಮ್ಮೆ ವಿವಾಹ ಸಂಬಂಧಗಳು ಸುಲಭದಲ್ಲಿ ನೆರವೇರದೆ ಪೋಷಕರಿಗೆ ತಲೆ ನೋವಾಗುವ ಸಂದರ್ಭಗಳೂ ಉಂಟು.

ಹಲವು ವರ್ಷಗಳಿಂದ ವೈದ್ಯಕೀಯ ಕ್ಷೇತ್ರದಲ್ಲಿ ಕಂಡು ಬಂದಿರುವ ಮುನ್ನಡೆಗಳ ಪರಿಣಾಮವಾಗಿ ಮೆಳ್ಳಗಣ್ಣನ್ನು ಆರಂಭದ ಹಂತದಲ್ಲೇ ಪತ್ತೆಹಚ್ಚಿ ಚಿಕಿತ್ಸೆ ಕೈಗೊಳ್ಳುವುದರಿಂದ ಅದನ್ನು ಸರಿಪಡಿಸಲು ಸಾಧ್ಯವಾಗುವಂತಹ ಪರಿಸ್ಥಿತಿ ಉಂಟಾಗಿದೆ. ಆದರೆ ಬಹಳ ವರ್ಷಗಳ ನಂತರ ಈ ಚಿಕಿತ್ಸೆ ಕೈಗೊಂಡಲ್ಲಿ ಸಾಕಷ್ಟು ಪರಿಣಾಮ ಆಗಲಾರದು. ಮೆಳ್ಳಗಣ್ಣಿನ ಚಿಹ್ನೆಯು ಸ್ವಲ್ಪವೇ ಕಂಡುಬಂದರೂ ತಕ್ಷಣ ತಜ್ಞರ ಬಳಿ ಕೊಂಡೊಯ್ದಲ್ಲಿ ತೊಂದರೆಗೆ ತಕ್ಕ ಸ್ವರೂಪದ ಚಿಕಿತ್ಸೆಯನ್ನು ಕೈಗೊಳ್ಳುವುದರ ಮೂಲಕ ನೇತ್ರಗಳ ವಕ್ರತೆಯನ್ನು ಸರಿಪಡಿಸಬಹುದು.

ಮೆಳ್ಳಗಣ್ಣು ಕಂಡುಬರಲು ಸಾಮಾನ್ಯವಾದ ಕೆಲವು ಕಾರಣಗಳೆಂದರೆ ಕಣ್ಣು ಗುಡ್ಡೆಯ ಸುತ್ತಲೂ ಇರುವ ಮಾಂಸಖಂಡಗಳ ನಿಶ್ಯಕ್ತಿ, ಮತ್ತು ದೃಷ್ಟಿಶಕ್ತಿಯಲ್ಲಿ ಎರಡೂ ನೇತ್ರಗಳ ನಡುವೆ ಅಪಾರ ವ್ಯತ್ಯಾಸ. ಕೆಲವೊಮ್ಮೆ ಆರಂಭ ಹಂತದಲ್ಲಿ ವ್ಯಕ್ತಿಯು ಧರಿಸುವ ಸೂಕ್ಷ್ಮವಾದ ಕನ್ನಡಕಗಳೇ ಈ ಸ್ಥಿತಿಗೆ ಚಿಕಿತ್ಸೆಯಾಗಬಹುದು. ಕೆಲ ಸಂದರ್ಭಗಳಲ್ಲಿ ಶಸ್ತ್ರ ಚಿಕಿತ್ಸೆಯ ಅಗತ್ಯವೂ ಕಂಡು ಬರಬಹುದು ಈ ರೀತಿ ಮೆಳ್ಳಗಣ್ಣಿಗೆ ತಕ್ಕ ಚಿಕಿತ್ಸಾ ಸೌಲಭ್ಯಗಳು ಲಭ್ಯವಿದ್ದರೂ "ಅದು ಅದೃಷ್ಟದ ಸಂಕೇತ"ವೆಂಬ ನಂಬಿಕೆಯಿಂದ ಯಾವ ಕ್ರಮವನ್ನೂ ಕೈಗೊಳ್ಳದೆ ಸುಮ್ಮನಿರುವ ಪೋಷಕರೇ ಅಧಿಕ.

ಬಹುಶಃ ಈ ನಂಬಿಕೆ ಬೆಳೆದು ಬರಲು ಕಾರಣ ಹಿಂದೆ ಈ ತೊಂದರೆಗೆ ಯಾವುದೇ ಚಿಕಿತ್ಸೆ ಲಭ್ಯವಿಲ್ಲದೆ ಇದ್ದುದು. ದೇಹದ ನ್ಯೂನತೆಗೆ ಅದೃಷ್ಟವೆಂಬ ಹೆಸರನ್ನಿತ್ತ ಕಾರಣ, ಆ ನ್ಯೂನತೆಯ ಅವಲಕ್ಷಣ ಮತ್ತು ಇತರ ತೊಂದರೆಗಳಿಗೆ ಮುಖವಾಡ ಹಾಕಿದಂತೆ ಆಗಿ, ವ್ಯಕ್ತಿಯ ನ್ಯೂನತೆಯನ್ನು ಪರಿಗಣಿಸುವ ಗೋಜಿಗೆ ಯಾರೂ ಹೋಗದಂತಹ ಪರಿಸ್ಥಿತಿ ಬಂದಿತು.

ಆದರೆ ಈಗಿನ ಪರಿಸ್ಥಿತಿಯಲ್ಲಿ ಮೆಳ್ಳಗಣ್ಣನ್ನು ಅದೃಷ್ಟವೆಂದು ಕರೆಯುವುದಕ್ಕಿಂತ ಪೋಷಕರ ಅಲಕ್ಷ್ಯ, ಅಜ್ಞಾನಗಳನ್ನು ಎಲ್ಲರಿಗೂ ಸಾರುವ ದುರದೃಷ್ಟದ ಸಂಗತಿ ಎಂದೇ ಹೇಳಬಹುದು. ಏಕೆಂದರೆ ಈ ಸ್ಥಿತಿಯನ್ನು ಚಿಕ್ಕ ವಯಸ್ಸಿನಲ್ಲಿ ಗುರುತಿಸಲೂ ಬಹುದು. ಚಿಕಿತ್ಸೆ ಕೈಗೊಳ್ಳಲೂಬಹುದು. ಮೆಳ್ಳಗಣ್ಣಿನ ಚಿಕಿತ್ಸೆಗೆ ತಗಲುವ ವೆಚ್ಚವೂ ಅಲ್ಪ ಪ್ರಮಾಣದ್ದೇ ಆಗಿರುತ್ತದೆ. ಮೆಳ್ಳಗಣ್ಣು ತೀರ ಕಡಿಮೆ ಪ್ರಮಾಣದಲ್ಲಿರುವಾಗ ಮಾತ್ರ ಅದನ್ನು ಪತ್ತೆ ಹಚ್ಚಲು ನೇತ್ರ ತಜ್ಞರ ಅಗತ್ಯವೇ ವಿನಃ ಮಿಕ್ಕ ಸಂದರ್ಭಗಳಲ್ಲಿ ಅದನ್ನು ಗುರುತಿಸುವುದು ಕಷ್ಟದ ಕೆಲಸವೇನಲ್ಲ ಎಂಬುದು ಎಲ್ಲರಿಗೂ ತಿಳಿದ ವಿಷಯ.

ಕುಟುಂಬ ವರ್ಗದಲ್ಲೇ ಆಗಲಿ, ಬಂಧು-ಮಿತ್ರರು ಅಥವಾ ನೆರೆಹೊರೆಯವರಲ್ಲೇ ಆಗಲಿ ಮೆಳ್ಳಗಣ್ಣುಳ್ಳ ವ್ಯಕ್ತಿ (ಅದರಲ್ಲೂ ಚಿಕ್ಕ ವಯಸ್ಸಿನವರು) ಇದ್ದಲ್ಲಿ ತಡಮಾಡದೆ ನೇತ್ರ ತಜ್ಞರ ಸಲಹೆ ಪಡೆಯಲು ಸೂಚಿಸಿ.

(3ನೇ ಪುಟಕ್ಕೆ)

## ಪದ್ಯದಂಕಣ

### ಅಂತರ

**ಬಡವ**

ಕಿತ್ತು ತಿನ್ನುವ ಬಡತನ
ಜೊತೆಗೆ ಅತಿ ಸಂತಾನ
ಗುಣವಾಗದ ರೋಗ ರುಜಿನ
ಎಷ್ಟು ದುಡಿದರೂ
ಬಗೆ ಹರಿಯದ ಸಮಸ್ಯೆಗಳು
ದಿನದಿನಕ್ಕೂ ವೃದ್ಧಿಯಾಗುವ
ಕಷ್ಟ ಕೋಟಲೆಗಳು
ನಾಳೆ ಹೇಗೆಂಬ ಚಿಂತೆಯಲಿ
ಬಳಲಿ ಬೆಂಡಾದ
ಮೇಲೇರುವ ದಾರಿ ಕಾಣದೆ
ತತ್ತರಿಸಿ ಹೋದ
ಶ್ರಮದ ದುಡಿಮೆಯಿಂದ
ತನಗರಿವಿಲ್ಲದೇ
ನಿದ್ರಾ ದೇವಿಗೆ ಶರಣಾದ

**ಶ್ರೀಮಂತ**

ಗಳಿಸಿದ ಅಪಾರ ಆಸ್ತಿ
ಒಡವೆ ಬಂಗಾರ
ಬಚ್ಚಿಟ್ಟ ಕಪ್ಪು ಹಣದ
ಕಂತೆ ಕಟ್ಟುಗಳು
ಇಷ್ಟೆಲ್ಲ ಇದ್ದರೂ
ಏನೋ ಹೇಳಲಾಗದ ಕೊರತೆ
ಸರಕಾರದ
ತೆರಿಗೆ ಹೊರೆಗಳ ಚಿಂತೆ
ಸುಖದ ಸುಪ್ಪತ್ತಿಗೆಯಲಿ
ಪವಡಿಸಿದ್ದರೂ
ನಿದ್ರೆಯಿಲ್ಲದೆ ಹೊರಳಾಡಿದ

—ಎಸ್. ಎಸ್. ಸೀತಾರಾಂ, ಸತ್ತಿಕಲ್ಲು




### ಚಿಟ್ಟೆ ಹಾಡು

ಚಿಟ್ಟೆ ಬಾ ಬಾ ಬಾ
ಬಣ್ಣದ ರೆಕ್ಕೆ ತೋರು
ಒಂದೇ ನಿಮಿಷಕೆ ಹಾರು
ಹೂವಿನ ರಸವನು ಹೀರು;
ಚಿಟ್ಟೆ ಬಾ ಬಾ ಬಾ
ನನಗೂ ಹಾರಲು ಕಲಿಸು
ನನಗೂ ಹೀರಲು ಕಲಿಸು
ಚಿಟ್ಟೆ ಬಾ ಬಾ ಬಾ

—ಅಲಂಪು
ಎರಡನೇ ತರಗತಿ
ಶಿವಮೊಗ್ಗ

### ಪಂಚ ತಂತ್ರ

ಜ್ಞಾನಕ್ಕೆ ಸಮನಾದ ಬೇರೆ ಆಸ್ತಿ ಇಲ್ಲ
ಆಸೆಗಿಂತ ಬೇರೆ ಶತ್ರುವಿಲ್ಲ
ಒಳ್ಳೆಯ ನಡತೆಗೆ ಸಮನಾದ ಆಭರಣವಿಲ್ಲ
ಸಂತೋಷಕ್ಕೆ ಸಮನಾದ ಐಶ್ವರ್ಯವಿಲ್ಲ
ಶಾಂತಿಗೆ ಸಮನಾದ ಯಾವುದೇ
ವಿಜಯವಿಲ್ಲ

(ಸಂಗ್ರಹ): ಬಾಣಂಕಿ ಪ್ರಕಾಶ್
ತೀರ್ಥಹಳ್ಳಿ

## ಪ್ರಾಣ ಸ್ನೇಹಿತರ ಎರಡು ಕಥೆಗಳು

### 1. ಗೆಳೆಯರ ಆಯ್ಕೆ

ಒಂದು ಕಾಡಿನಲ್ಲಿ ಒಂದು ಕಾಗೆ. ಅದಕ್ಕೆ ಹತ್ತಿರದಲ್ಲಿ ಯಾರೂ ಸ್ನೇಹಿತರಿರಲಿಲ್ಲ. ಒಂಟಿಯಾಗಿತ್ತು.

ಒಂದು ದಿನ ಒಬ್ಬ ಬೇಡ ಆ ಕಾಡಿಗೆ ಬಂದ. ನೆಲದಲ್ಲಿ ಕಾಳು ಹರಡಿ ಬಲೆ ಬೀಸಿದ. ಸ್ವಲ್ಪ ದೂರದಲ್ಲಿ ಅವಿತುಕೊಂಡ. ಈ ಯಮದೂತನಿಗೆ ಬಲಿಯಾಗುವವರು ಯಾರೋ! ಎಂದು ಕಾಗೆ ಆತಂಕದಿಂದ ನೋಡತೊಡಗಿತು.

ಸ್ವಲ್ಪ ಹೊತ್ತಿನಲ್ಲಿ ಒಂದು ಪಾರಿವಾಳಗಳ ಹಿಂಡು ಹಾರಿ ಬಂತು. ಕಾಳನ್ನು ನೋಡಿ ಅವು ಅದನ್ನು ತಿನ್ನಲು ಇಳಿಯಬೇಕೆನ್ನುವಾಗ ಅವುಗಳ ರಾಜ, "ಸ್ವಲ್ಪ ತಾಳಿ. ಇದರಲ್ಲೇನಾದರೂ ಮೋಸವಿರಬಹುದು" ಎಂದು ಎಚ್ಚರಿಸಿತು. ಆದರೆ ಕೆಲವು ಪಾರಿವಾಳಗಳು ಅದರ ಮಾತನ್ನು ಒಪ್ಪದೆ ಕಾಳು ತಿನ್ನಲು ಎರಗಿದಾಗ ಉಳಿದವೂ ಎರಗಿದವು. ತನ್ನ ಪ್ರಜೆಗಳನ್ನು ಬಿಟ್ಟು ಹೋಗಲಾರದೆ ರಾಜನೂ ಅವುಗಳ ಜೊತೆಗೇ ಇಳಿಯಿತು.

ಕಾಳು ತಿನ್ನುವ ಭರದಲ್ಲಿ ತಾವು ಬಲೆಯೊಳಗೆ ಸಿಕ್ಕಿಬಿದ್ದಾಗ ಅವೆಲ್ಲ ಭಯದಿಂದ ನಡುಗಿದವು. ತಮ್ಮನ್ನೆಲ್ಲ ಕಾಳು ತಿನ್ನಲು ಕರೆದ ಪಾರಿವಾಳವನ್ನು ಅವು ಬಯ್ಯತೊಡಗಿದವು. ಆಗ ರಾಜ, "ಈಗ ಮಾತಾಡಿ ಹೊತ್ತು ಹಾಳು ಮಾಡಬೇಡಿ. ತಿನ್ನಲು ಬಂದವರು ತಪ್ಪಿನಲ್ಲೂ ಪಾಲುದಾರರಾಗಿ" ಎಂದು ಬುದ್ಧಿ ಹೇಳಿತು. ಅನಂತರ ಅವುಗಳಿಗೆಲ್ಲ ಧೈರ್ಯ ತುಂಬಿ ಒಂದು ಉಪಾಯ ಹೇಳಿಕೊಟ್ಟಿತು. ಕೂಡಲೇ ಅವೆಲ್ಲ ಒಟ್ಟಾಗಿ ಬಲೆಯನ್ನೆತ್ತಿಕೊಂಡು ಆಕಾಶಕ್ಕೆ ಹಾರಿದವು.

ಬೇಡ ಅವುಗಳನ್ನು ಅಟ್ಟಿಸಿಕೊಂಡು ಸ್ವಲ್ಪ ದೂರ ಹೋಗಿ ನಿರಾಶೆಯಿಂದ ಹಿಂದಿರುಗಿದ. ಇದನ್ನೆಲ್ಲ ಆಶ್ಚರ್ಯದಿಂದ ನೋಡುತ್ತಿದ್ದ ಕಾಗೆ ಅವು ಮುಂದೇನು ಮಾಡುತ್ತವೋ ಎಂದು ಕುತೂಹಲದಿಂದ ಹಿಂಬಾಲಿಸಿತು.

ರಾಜ ಪಾರಿವಾಳ ಪಕ್ಕದ ಕಾಡಿನಲ್ಲಿದ್ದ ತನ್ನ ಗೆಳೆಯನಾದ ಇಲಿಯ ಬಳಿಗೆ ತನ್ನ ಪ್ರಜೆಗಳನ್ನು ಕರೆದೊಯ್ದಿತು. ಗೆಳೆಯನನ್ನು ಕೂಗಿ ಕರೆದು ತಮ್ಮನ್ನೆಲ್ಲ ಬಿಡಿಸಲು ಕೇಳಿಕೊಂಡಿತು.

"ಎಲ್ಲರನ್ನೂ ಬಿಡಿಸಲು ನನ್ನ ಶಕ್ತಿ ಸಾಕಾಗಲಾರದು. ಆದ್ದರಿಂದ ಮೊದಲು ನಿನ್ನನ್ನು ಬಿಡಿಸುತ್ತೇನೆ" ಎಂದು ಇಲಿ ಹೇಳಿದಾಗ ರಾಜ ಒಪ್ಪಲಿಲ್ಲ. "ನನ್ನ ಪ್ರಜೆಗಳಿಗಾಗಿ ನನ್ನದೊಂದು ಜೀವ ಹೋದರೂ ಚಿಂತೆಯಿಲ್ಲ" ಎಂದು ಅದು ಒತ್ತಾಯದಿಂದ ಹೇಳಿದಾಗ, ಇಲಿ ಕಷ್ಟಪಟ್ಟು ಬಲೆ ಕತ್ತರಿಸಿ ಎಲ್ಲರನ್ನು ಬಿಡಿಸಿತು. ಪಾರಿವಾಳಗಳೆಲ್ಲ ಗೆಳೆಯನಿಂದ ಔತಣ ಪಡೆದು ಹೊರಟು ಹೋದವು. ಕಾಗೆಗೆ ಈ ಅದ್ಭುತ ಸ್ನೇಹವನ್ನು ನೋಡಿ ಆನಂದವಾಯಿತು. ಅದು ಇಲಿಯ ಬಳಿ ಬಂದು "ನನ್ನನ್ನೂ ನಿನ್ನ ಸ್ನೇಹಿತನಾಗಿ ಮಾಡಿಕೋ" ಎಂದು ಕೇಳಿಕೊಂಡಿತು. ಆದರೆ ಇಲಿ ಹೆದರಿ ಒಪ್ಪಲಿಲ್ಲ.

ಅದಕ್ಕೆ ಕಾಗೆ ಹೇಳಿತು.— "ನೋಡು, ನೀನು ನನ್ನ ಆಹಾರವೇನೋ ಹೌದು. ಆದರೆ ನೀನೇನೂ ನನ್ನ ಅರೆ ಹೊಟ್ಟೆಗೂ ಸಾಲುವುದಿಲ್ಲ. ಆದ್ದರಿಂದ ನಿನ್ನನ್ನು ಕೊಂದೇನೆಂದು ಭಯ ಪಡಬೇಡ. ನೀನು ಎಂಥ ಒಳ್ಳೆಯ ಸ್ನೇಹಿತ ಎಂದು ನಾನು ಕಂಡಿದ್ದೇನೆ. ನನಗೆ ನಿನ್ನ ಸ್ನೇಹ ಬೇಕೇ ಬೇಕು. ಇಲ್ಲದಿದ್ದರೆ ನಾನು ಇಲ್ಲೇ ಉಪವಾಸ ಮಾಡಿ ಸಾಯುವೆ" ಎಂದಿತು.

ಇದನ್ನು ಕೇಳಿ ಇಲಿಯ ಮನಸ್ಸು ಕರಗಿತು. ಅದು ಕಾಗೆಯನ್ನು ಸ್ನೇಹಿತನಾಗಿ ಮಾಡಿಕೊಂಡಿತು. ಅವು ಸಂತೋಷದಿಂದ ಕಾಲ ಕಳೆದವು. ಹೀಗೆ ಕಾಗೆ ಒಬ್ಬ ಉತ್ತಮ ಸ್ನೇಹಿತನನ್ನು ಸಂಪಾದಿಸಿತು.

(ಇನ್ನೊಂದು ಕಥೆ ಮುಂದಿನ 'ಚಿನಾರಿ ಕೂಟ'ದಲ್ಲಿ)

### ಒಗಟುಗಳು

1) ಅಂಕು ಡೊಂಕಿನ ಬಾವಿ ಶಂಕು ಚಕ್ರದ ಬಾವಿ ಬಗ್ಗಿ ನೋಡಿದರೆ ನೀರಿಲ್ಲ

2) ಕಲ್ಲಿನ ಕಡವು, ಬೆಳ್ಳಿ ಚಾಡವು ನೀರುಂಟು, ಮೀನಿಲ್ಲ.

3) ಅರ್ಧ ರೊಟ್ಟಿಗೆ ಸಾವಿರ ತರಹದ ಪಲ್ಯ

4) ತೇರು ಹೋಗುತ್ತೆ ಹೂ ಬೀಳುತ್ತೆ

5) ಅಂಕು ಡೊಂಕು ಶಂಕು ಚಕ್ರ ಮೂರು ತಲೆ ಹತ್ತು ಕಾಲು

6) ನಾಲ್ಕು ಬಾವಿಯ ನೀರು ಒಂದೇ ಬಾವಿಗೆ ಬರುತ್ತೆ

7) ಒಂದು ಗಿಡದಲ್ಲಿ 5 ತರದ ಹೂ

8) ರಾಜರಂಗಳದಲ್ಲಿ ಬೀಜವಿಲ್ಲದೇ ಗಿಡ ಹುಟ್ಟಿ ರಾಜರಾಜರಿಗೂ ಹೆಸರಾದೆ.

(ಉತ್ತರಗಳು: ಮುಂದಿನ 'ಚಿನಾರಿಕೂಟ' ದಲ್ಲಿ)

(ಸಂಗ್ರಹ): ಸಂತೋಷ್ ಕುಮಾರ್
5ನೇ ತರಗತಿ, ಲೋಕನಾಥಪುರ

## ಓದುಗರ ಪತ್ರಗಳು

# ಮಂಡಲ ಕಾರ್ಯದರ್ಶಿಯೊಬ್ಬರ ಹದ್ದು ಮೀರಿದ ವರ್ತನೆ

ಮಾನ್ಯರೆ,

ಚಾವಲ್ಮನೆ ಮಂಡಲ ಪಂಚಾಯ್ತಿಗೆ ಸೇರಿದ ಚಾವಲ್ಮನೆ ಹಾಗೂ ಹಾಲ್ಮುತ್ತೂರು ಗ್ರಾಮಗಳ ಗ್ರಾಮಸಭೆಗಳು ಫೆ. 15 ಮತ್ತು 17ರಂದು ನಡೆದು ನಾವುಗಳು ನಮ್ಮ ನಮ್ಮ ಗ್ರಾಮಸಭೆಗಳಲ್ಲಿ ಗ್ರಾಮದ ಸಮಸ್ಯೆಗಳ ಬಗ್ಗೆ ಚರ್ಚಿಸಿದೆವು. ಮಂಡಲ ಕಾರ್ಯದರ್ಶಿ ರಫೀಕ್ ಅಹಮದ್ ತಮ್ಮ ಕಾರ್ಯದಲ್ಲಿ ಉದಾಸೀನತೆಯನ್ನು ತೋರುತ್ತಿದ್ದು ಸೆಪ್ಟೆಂಬರ್‌ನಲ್ಲಿ ಕಡಿದ ರಸ್ತೆಯ ಬಗ್ಗೆ ಇನ್ನೂ ಬಿಲ್ಲು ಮಾಡದೇ ಸತಾಯಿಸುತ್ತಿರುವುದಾಗಿಯೂ, ಗ್ರಾಮಸ್ಥರು ಕಛೇರಿಗೆ ಹೋದಾಗ ಅವರನ್ನು ಅಗೌರವದಿಂದ ಕಾಣುತ್ತಿರುವುದಾಗಿಯೂ ನಾವು ಪ್ರಧಾನರಿಗೆ ತಿಳಿಸಿ ಇವರ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳುವಂತೆ ಒತ್ತಾಯಿಸಿದೆವು.

ಪ್ರಧಾನರು ಉತ್ತರಿಸಿ, ಸಾಕಷ್ಟು ಸಿಬ್ಬಂದಿವರ್ಗ ಇಲ್ಲದಿರುವುದರಿಂದ ವಿಳಂಬವಾಗಿರುವುದೇ ಹೊರತು ಅನ್ಯಥಾ ಅಲ್ಲವೆಂದು ತಿಳಿಸಿದಾಗ ಗ್ರಾಮಸ್ಥರ ಪರವಾಗಿ ಎಚ್. ವಿ. ನಾಗರಾಜ್, ಯಾರಾದರೂ ಗೌರವವಾಗಿ ಕೆಲಸ ಮಾಡಿಕೊಟ್ಟಲ್ಲಿ ತೆಗೆದುಕೊಳ್ಳಬಹುದೆಂದು ಸೂಚಿಸಿದರು. ಕೂಡಲೇ ಕಾರ್ಯದರ್ಶಿಯವರು ಪ್ರಧಾನರ ಅನುಮತಿ ಇಲ್ಲದೇ ಮಾತನಾಡಿ, ನಾಗರಾಜ್‌ರವರ ಕಡೆ ಕೈ ಮಾಡಿ ತೋರಿಸಿ "ಅವನನ್ನೇ ನನ್ನ ಬದಲು ತೆಗೆದುಕೊಳ್ರಿ. ಕೆಲಸ ಮಾಡಿಕೊಡುತ್ತಾನಂತಲ್ಲ" ಎಂದು ಉದ್ಧಟತನದಿಂದ ಹೇಳಿದಾಗ ಕುಪಿತರಾದ ಗ್ರಾಮಸ್ಥರು ಒಕ್ಕೊರಲಿನಿಂದ ಕಾರ್ಯದರ್ಶಿಯ ಮಾತುಗಳನ್ನು ಖಂಡಿಸಿ, ಹೀಗೆ ಸಭೆಗೆ ಅವಮಾನ ಮಾಡಿದುದಕ್ಕಾಗಿ ಕಾರ್ಯದರ್ಶಿಯವರು ಆ ಮಾತುಗಳನ್ನು ವಾಪಸ್ಸು ಪಡೆಯಬೇಕೆಂದು ಒತ್ತಾಯಿಸಿದರು. ಆಗ ಉಂಟಾದ ಗೊಂದಲದಿಂದ ಪ್ರಧಾನರು ಸಭೆಯನ್ನು ಮುಂದೂಡಿದರು.

ತೀವ್ರವಾದ ಸಮಸ್ಯೆಗಳಿದ್ದಾಗ ಹೀಗೆ ಮಾತಿನ ಚಕಮಕಿಗಳು, ಗೊಂದಲಗಳು ಉಂಟಾಗುವುದು ಸಹಜ ಗ್ರಾಮಸ್ಥರ ಭಾವನೆಗಳು, ಅಭಿಪ್ರಾಯಗಳು ಪ್ರಕಟಗೊಳ್ಳಲು ಅವಕಾಶ ಕೊಟ್ಟು, ಅನಂತರ ಪ್ರಧಾನರು ಅವುಗಳಿಗೆ ಸೂಕ್ತ ಸಮಜಾಯಿಷಿ, ಸಮಾಧಾನ ನೀಡಿ ಜನರನ್ನು ಶಾಂತಗೊಳಿಸಿ ಸಭೆಯನ್ನು ಮುಂದುವರಿಸಬಹುದಿತ್ತು. ಅದರ ಬದಲು ಹೀಗೆ ಒಂದೇ ಸಾರಿಗೆ ಸಭೆಯನ್ನು ಮುಂದೂಡಿದ್ದು ಸರಿಯಾದ ಕ್ರಮವಾಗಿರಲಿಲ್ಲ

ಆನಂತರ ಯಾವ ತರಹದ ಅಹಿತಕರ ಘಟನೆಗಳೂ ನಡೆಯಲಿಲ್ಲ ಆದಾಗ್ಯೂ ಕಾರ್ಯದರ್ಶಿಯವರು ಹರಿಹರಪುರ ಪೋಲೀಸ್ ಠಾಣೆಯಲ್ಲಿ ನಾಗರಾಜ್ ಮತ್ತು ನನ್ನನ್ನೂ ಸೇರಿದಂತೆ ಇನ್ನೂ ಕೆಲವು ಗ್ರಾಮಸ್ಥರ ಮೇಲೆ ದೂರು ನೀಡಿದ್ದಾರೆ ಇದಕ್ಕೆ ಪ್ರಧಾನರನ್ನಾಗಲಿ, ಯಾವ ಸದಸ್ಯರನ್ನಾಗಲಿ ಕೇಳದೇ, ಸ್ವತಃ ಮಂಡಲ ಪಂಚಾಯ್ತಿಯ ಲೆಟರ್ ಹೆಡ್ ಹಾಗೂ ಮೊಹರುಗಳನ್ನು ಉಪಯೋಗಿಸಿಕೊಂಡಿದ್ದಾರೆ. (ಖಾಸಗಿಯಾಗಿ ದೂರು ನೀಡಿರುವುದಲ್ಲ )

ಈ ದೂರಿನಲ್ಲಿ ನಾವುಗಳು ಅವರಿಗೆ ಅವಾಚ್ಯ ಶಬ್ದಗಳಿಂದ ಬೈದೆವೆಂದೂ, ಅವರ ಮೇಲೆ ಕೈ ಮಾಡಲು ಪ್ರಯತ್ನಿಸಿದೆವೆಂದೂ ದೂರಲಾಗಿದೆ.

ಇದು ಗ್ರಾಮದ ನಮ್ಮೆಲ್ಲರಿಗೂ ಮಾಡಿರುವ ಅವಮಾನ ಮತ್ತು ಅಪಚಾರವಾಗಿದೆ. ಅಧಿಕಾರ ವಿಕೇಂದ್ರೀಕರಣದ ಮೊದಲ ಹೆಜ್ಜೆಯಾಗಿ ಜಾರಿಗೆ ಬಂದಿರುವ ಜಿಲ್ಲಾ ಪರಿಷತ್ ಹಾಗೂ ಮಂಡಲ ಪಂಚಾಯ್ತಿ ವ್ಯವಸ್ಥೆಯು ಹೀಗಾದರೆ ಎಷ್ಟರ ಮಟ್ಟಿಗೆ ಯಶಸ್ವಿಯಾದೀತು? ಈ ಬಗ್ಗೆ ಸಂಬಂಧಿಸಿದವರು ಗಮನ ಹರಿಸಿಯಾರೆ?

**—ಗ್ರಾಮಸ್ಥರ ಪರವಾಗಿ**
**ಚಾವಲ್ಮನೆ ಸುರೇಶ್ ನಾಯಕ್**

[ಈ ಬಗ್ಗೆ ಚಾವಲ್ಮನೆ ಮಂಡಲ ಪ್ರಧಾನರಿಂದ ವಿವರಣೆ ಕೇಳಿ ಪತ್ರ ಬರೆಯಲಾಗಿದೆ.
—ಸಂ.]

# ಮಂಜೂರಾದ ರಸ್ತೆ ಪೂರ್ಣಗೊಳಿಸಲು ಜಿ. ಪ. ಅಧ್ಯಕ್ಷರಿಗೆ ಗ್ರಾಮಸ್ಥರ ಮನವಿ

ಮಾನ್ಯರೆ,

ಕೊಪ್ಪ ತಾಲ್ಲೂಕು ಲೋಕನಾಥಪುರ ಗ್ರಾಮದ ಮಲಗಾರು ಗ್ರಾಮಸ್ಥರು ಜಿಲ್ಲಾ ಪರಿಷತ್ ಅಧ್ಯಕ್ಷರಿಗೆ ಬರೆದುಕೊಂಡ ಅರ್ಜಿ ಏನೆಂದರೆ,

ಲೋಕನಾಥಪುರದಿಂದ ಮಲಗಾರಿಗೆ ಜಿಲ್ಲಾ ಪರಿಷತ್‌ನಿಂದ 3 ಕಿ. ಮಿ. ರಸ್ತೆ ನಿರ್ಮಾಣಕ್ಕೆ ಹಣ ಮಂಜೂರಾಗಿ, ಕೆಲಭಾಗ ಕೆಲಸ ಸಹ ಆಗಿರುವುದು ಸರಿಯಷ್ಟೆ. ಆದರೆ ಸುಮಾರು 7–8 ವರ್ಷಗಳ ಹಿಂದೆ ಆದ ರಸ್ತೆಯನ್ನಷ್ಟೆ ಪುನಃ ರೂಪಿಸಿರುವುದಾಗಿದೆ. ಆಗ ಬಿಟ್ಟಲ್ಲಿಂದ ಮುಂದೆ 2 ಕಿ. ಮಿ. ಆಗಬೇಕಾದುದು ಅನಿವಾರ್ಯವಿದ್ದು, ಆ ಬಗ್ಗೆ ಮೇಲಿಂದ ಮೇಲೆ ಸಂಬಂಧಿಸಿದವರಿಗೆ ತಿಳಿಸಿದಾಗ್ಯೂ ನಿರರ್ಥಕವಾಗಿದೆ.

ಈಗ ನಿಲ್ಲಿಸಿದಲ್ಲಿಂದ ಮುಂದುವರೆಸಲು ಶ್ರೀಯುತ ಮರಿಯಪ್ಪನವರ ಜಮೀನಿನಲ್ಲಿ ಸುಮಾರು 100 ಗಜ ದೂರ ಹಾದು ಹೋಗಬೇಕಾಗಿದ್ದು, ಅವರಿಂದ ಊರಿನವರು ಮೌಖಿಕವಾಗಿ ಒಪ್ಪಿಗೆ ಪಡೆದಿರುತ್ತೇವೆ. ಅಲ್ಲದೆ ಅದಕ್ಕೆ ಪ್ರತಿಫಲವಾಗಿ ಆ ಜಾಗದ ಎರಡೂ ಪಕ್ಕದಲ್ಲಿ ಬೇಲಿ ಮಾಡಲು ಬೇಕಾಗುವ ಸುಮಾರು 50 ಕಲ್ಲು ಕಂಬ ಮತ್ತು 3 ಪಿಂತೆ ತಂತಿ ಸಹಾ ಈ ರಸ್ತೆಯಿಂದ ಪ್ರಯೋಜನ ಹೊಂದುವವರು ಸಾಮೂಹಿಕವಾಗಿ ಕೊಡಲು ಒಪ್ಪಿರುತ್ತಾರೆ.

ಅವಶ್ಯಕವಿದ್ದಲ್ಲಿ, ಸಂಬಂಧಿಸಿದವರು ಕಾನೂನು ಬದ್ಧವಾಗಿ ಒಪ್ಪಿಗೆ ಪಡೆದು ಈ ರಸ್ತೆ ಮುಂದುವರಿಸಿ ಕೊಡಬೇಕು ಮತ್ತು ಒಂದು ಸೇತುವೆ ಸಹಾ ಅಗತ್ಯವಿದೆ. ಪ್ರತಿ ಬಾರಿ ಚುನಾವಣೆ ಬಂದಾಗಲೂ ಈ ಭಾಗದ ಜನತೆ ಈ ಕೋರಿಕೆ ಮುಂದಿಡುವುದು, ಮುಂದಾಳುಗಳು ಖಂಡಿತಾ ಮಾಡಿಸುವುದಾಗಿ ಪೊಳ್ಳು ಭರವಸೆ ಕೊಡುವುದು ಮಾಮೂಲಾಗಿಬಿಟ್ಟಿದೆ. ಈ ಸಾರಿಯೂ ಹಾಗಾಗದಂತೆ ಕ್ರಮ ತೆಗೆದುಕೊಳ್ಳುವಿರಾಗಿ ನಂಬುತ್ತೇವೆ.

ಈ ಕೆಲಸಕ್ಕೆ ಹಣದ ಕೊರತೆ ಇದ್ದಲ್ಲಿ, ಇದೇ ರಸ್ತೆಗೆ ಲೋಕನಾಥಪುರದಿಂದ 1 ಕಿ. ಮಿ. ಜಲ್ಲಿ ರಸ್ತೆ ಮಂಜೂರಾಗಿರುವುದಾಗಿ ಕೇಳಿ ಬರುತ್ತಿದೆ ಅದಕ್ಕೆ ಬದಲಾಗಿ, ಸದ್ಯಕ್ಕೆ ಅದೇ ಹಣ ಉಪಯೋಗಿಸಿ ಈ ರಸ್ತೆ ಮುಂದುವರೆಸಬೇಕಾಗಿ ಅಪೇಕ್ಷಿಸುತ್ತೇವೆ.

(4ನೇ ಪುಟಕ್ಕೆ)

## ಮೆಳ್ಳಗಣ್ಣು-ಚಿಕಿತ್ಸೆ ಲಭ್ಯ

(2ನೇ ಪುಟದಿಂದ)

'ಮೆಳ್ಳಗಣ್ಣಿನ ಸ್ಥಿತಿಯನ್ನು ಸರಿಪಡಿಸಲು ಸಾಧ್ಯ ಅದು ಅದೃಷ್ಟದ ಸಂಕೇತವಲ್ಲ' ಎಂಬ ವಿಷಯವನ್ನು ಮನದಟ್ಟು ಮಾಡಲು ಪ್ರಯತ್ನಿಸಿ. ಈ ನಿಮ್ಮ ಸೂಚನೆ ಮೆಳ್ಳಗಣ್ಣಿನ ವ್ಯಕ್ತಿಯ ಜೀವನದಲ್ಲಿ ಹೊಸ ತಿರುವು ನೀಡಬಹುದು.

**—ಡಾ|| ಬಿ. ಸುಭಾಷ್,** ಬೆಂಗಳೂರು.
(ಸೌಜನ್ಯ : ತೀರ್ಥಹಳ್ಳಿ ಗ್ರಾಮಭಾರತಿ)

## ಸ್ಪರ್ಧೆಗೊಂದು ಸ್ಪರ್ಧೆ !

ಪ್ರೀತಿಯ ಚಿನಾರಿಗಳೆ,

ನಿಮ್ಮ 'ಚಿನಾರಿ ಕೂಟ'ದಲ್ಲಿ ಏನೂ ಸ್ಪರ್ಧೆ ಇಲ್ಲದೆ ಬಹಳ ಸಮಯವಾಯಿತಲ್ಲವೆ? ಗೆದ್ದವರಿಗೆ ಬಹುಮಾನ ಕೊಡುವುದಕ್ಕೆಂದು ನಾವು ಹೊಸದಾಗಿ ತಂದಿಟ್ಟಿರುವ ಮಕ್ಕಳ ಕಥೆಗಳ ಪುಸ್ತಕಗಳು ಹಾಗೇ ಕೂತುಬಿಟ್ಟವೆ. ಏನು ಮಾಡೋಣ ?

ಒಂದು ಉಪಾಯ ಮಾಡೋಣವೆ ? ಸ್ಪರ್ಧೆಗೆ ಆಗುವಂಥ ಯಾವುದಾದರೊಂದು ವಿಷಯವನ್ನೋ, ಬರಹವನ್ನೋ ನೀವೇ ಕಳಿಸಿ ಕೊಡಿ. ಉತ್ತಮವಾದ ಆಯ್ಕೆಗೆ ಅದಕ್ಕೇ ಒಂದು ಬಹುಮಾನ ಕೊಟ್ಟುಬಿಡೋದು. ಸ್ಪರ್ಧೆಯಲ್ಲಿ ಗೆದ್ದವರಿಗೆ ಮತ್ತೆ ಬೇರೆಯೇ ಬಹುಮಾನ. ಹೇಗಿದೆ ಉಪಾಯ ?

ಹಿಂದೊಮ್ಮೆ ಮಾಡಿದ್ದಂತೆ ಒಂದು ಅಪೂರ್ಣ ಕಥೆಯೋ, ಉತ್ತಮ ಒಗಟು ಅಥವಾ ಜಾಣ ಪ್ರಶ್ನೆಗಳೋ, ಪ್ರಬಂಧ–ಕವನ ಇತ್ಯಾದಿ ಸ್ಪರ್ಧೆ ಆಗಬಹುದೆಂದಾದರೆ ಅದಕ್ಕೆ ತಕ್ಕ ವಿಷಯವೋ — ಹೀಗೆ ನಿಮ್ಮ ಕಲ್ಪನೆಗೆ ಸರಿ ಕಂಡಿದ್ದನ್ನು ಸೂಚಿಸಿ. (ಪ್ರಶ್ನೆಗೆ ಉತ್ತರಗಳನ್ನು ನಿಮ್ಮ ಸ್ನೇಹಿತರಿಂದ ಗುಟ್ಟಾಗಿಡಿ !)

ನಿಮ್ಮ ಪತ್ರ ನಮಗೆ 15–3–88ರೊಳಗಾಗಿ ತಲುಪುವಂತೆ ಕಳಿಸಿ.

—ಸಂಪಾದಕ.

# ಸಣ್ಣ ನೀರಾವರಿ ಕಛೇರಿ ಸಿಬ್ಬಂದಿಯ ದುರಹಂಕಾರ ?

ಮಾನ್ಯರೆ,

ಮೇಲ್‌ಬೆಳ್ರೆ ಗ್ರಾಮದ ಗೌರಿಗದ್ದೆ ಎಂಬಲ್ಲಿ ಈಗಾಗಲೇ ನಿರ್ಮಿವಾದ, ಸಾಕಷ್ಟು ಹಣ ಮುಳುಗಡೆಯಾಗಿ ನಿರೀಕ್ಷಿತ ಮಟ್ಟ ಕಾಣದೆ ಜನತೆಗೆ ಮೋಸವಾಗಿರುವ "ಪಿಕ್‌ಅಪ್" (ಕಿರು ನೀರಾವರಿ ಅಣೆಕಟ್ಟು) ವಿಷಯವಾಗಿ ಚರ್ಚಿಸಲು, ಸಣ್ಣ ನೀರಾವರಿ ಇಲಾಖೆಯ ಕಾರ್ಯ ದಕ್ಷತೆಗೆ ಹೆಸರಾದ ಇಂಜಿನಿಯರ್ ಬಾಲರಾಜ್‌ರವರನ್ನು ಕಾಣಲು ದಿನಾಂಕ 17.2.1988ರಂದು ಕೊಪ್ಪ ಸಣ್ಣ ನೀರಾವರಿ ಕಛೇರಿಗೆ ಹೋದೆ. ಆದರೆ ಅಲ್ಲಿ ಇಂಜಿನಿಯರ್ ಇರಲಿಲ್ಲ.

ಅಲ್ಲೇ ಪಕ್ಕದ ರೂಮಿನಲ್ಲಿ ಕುಳಿತ ಕನ್ನಡಕಧಾರಿ ಠೀವಿಯ ಅಧಿಕಾರಿಯ ಬಳಿ, "ಸಾರ್ ಇಂಜಿನಿಯರ್ ಎಲ್ಲಿದ್ದಾರೆ ?" ಎಂದು ಕೇಳಿದೆ. ಆದರೆ ಆತ ಸುಮಾರು ಐದು ನಿಮಿಷ ನನ್ನನ್ನೇ ದೃಷ್ಟಿಸಿ ನೋಡಿ ಅಲ್ಲೇ ಒಳಗೆ ಇದ್ದಾರೆ ನೋಡಿ ಎಂದ. ಪುನಃ ಒಳಗೆ ಹೋಗಿ ನೋಡಿ 'ಇಲ್ಲ ಸಾರ್' ಎಂದೆ. ಅಲ್ಲೇ ಕುರ್ಚಿ ಕೆಳಗೆ ನೋಡಿ, ಟೇಬಲ್ ಒಳಗೆ ನೋಡಿ ಎಂದು—ಹಿರಿಯ ಅಧಿಕಾರಿಗಳನ್ನು ಬೆಕ್ಕಿಗೆ ಹೋಲಿಸಿದ್ದಾರೆ. "ಏನು ಸಾರ್, ಹಾಸ್ಯ ಮಾಡುತ್ತೀರಲ್ಲ?" ಎಂದು ಕೇಳಿದೆ. ಅದಕ್ಕೆ ಆತ, 'ನೀವೇನು ಪುಡಿ ರಾಜಕಾರಣಿ ಅಂತ ಕಾಣುತ್ತೆ. ನಿಮ್ಮಂತಹ ಎಷ್ಟೋ ಮಂದಿ ರಾಜಕಾರಣಿಗಳನ್ನು ನೋಡಿದ್ದೇನೆ" ಎಂದು ಅವಾಚ್ಯ ಶಬ್ದಗಳೊಡನೆ ಬೈದ ಉಳಿದ ಅಧಿಕಾರಿಗಳು ಮೂಕ ಪ್ರೇಕ್ಷಕರಾಗಿ ನೋಡುತ್ತಾ ಕುಳಿತರು.

ಆತನ ಅಹಂಕಾರದ ಮಾತನ್ನು ನೋಡಿ, ಜನತೆಯ ಸರ್ಕಾರ ಒಂದರೂ ಹಿಟ್ಲರುಗಳಂಥ ಅಧಿಕಾರಿಗಳು ಇದ್ದಾರಲ್ಲ ಎಂದು ವ್ಯಥೆಯಾಯಿತು. ಇದು ನನ್ನೊಬ್ಬನ ಕಥೆಯಾಗಿರದೆ, ನೂರಾರು ಜನರ ಕಥೆಯಾಗಿರಬಹುದಾದ್ದರಿಂದ, 20 ಅಂಶಗಳ ಸಭೆಯಲ್ಲಿ ಶಾಸಕರ ಗಮನ ಸೆಳೆಯುವುದಾಗಿ ಹೇಳಿ ಹೊರಬಂದೆ.

ಹಳ್ಳಿಯಿಂದ ಬರುವ ಬಡ ಅವಿದ್ಯಾವಂತರು ಈ ಕಛೇರಿಯಲ್ಲಿ ತಮ್ಮ ಸಮಸ್ಯೆಗಳನ್ನು ವಿಚಾರಿಸಿದರೆ ಅವರ ಪಾಡೇನು ? ಇನ್ನಾದರೂ ಇಂತಹ ದುರಹಂಕಾರಿ ವರ್ತನೆಯನ್ನು ಬಿಟ್ಟು ಜನತೆಯೊಡನೆ ಸಹಕರಿಸಲಿ ಎಂದು ನನ್ನ ಆಶಯ.

—ಸತೀಶ್,
ನಂದಿಗೋಡು, ನಿಲುವಾಗಿಲು.

(ಈ ದೂರಿನ ಬಗ್ಗೆ ಸಂಬಂಧಪಟ್ಟ ಕಛೇರಿಯ ಸ್ಪಷ್ಟನೆ ಈ ಕೆಳಗಿನಂತಿದೆ.
—ಸಂ.)

### ಸ್ಪಷ್ಟನೆ

ನಮ್ಮ ಕಛೇರಿಯ ಸಂಬಂಧಪಟ್ಟ ಸಿಬ್ಬಂದಿಯನ್ನು ವಿವರಣೆ ಕೇಳಲಾಗಿ, ಸದರಿ ವ್ಯಕ್ತಿಯು ತಾ. 17 2 88 ರ ಮಧ್ಯಾಹ್ನ 3 30ರ ಸಮಯ ಕಛೇರಿಗೆ ಬಂದು ಯಾರಲ್ಲೂ ಯಾವ ವಿಷಯವನ್ನೂ ಕೇಳದೆ ನೇರವಾಗಿ ಅಧಿಕಾರಿಗಳ ಕೊಠಡಿಗೆ ಪ್ರವೇಶಿಸಿ ನೋಡಿಬಂದು, (ಅಂದು ನಾನು ಕರ್ತವ್ಯದ ಮೇಲೆ ವಿಭಾಗೀಯ ಕಛೇರಿಗೆ ಹೋಗಿದ್ದೆ) ಸಿಬ್ಬಂದಿಯವರಲ್ಲಿ "ಸಾಹೇಬರು ಇಲ್ವಾ?"

(4ನೇ ಪುಟಕ್ಕೆ)

## ದುರಸ್ತಿ ಕಾಣದ ತಾ|| ಬೋರ್ಡ್ ರಸ್ತೆಗಳು

ಕೊಪ್ಪ : ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯ್ತಿ ವ್ಯವಸ್ಥೆಯಿಂದಾಗಿ ಹಿಂದಿನ ತಾ. ಅ. ಮಂಡಳಿ ರಸ್ತೆಗಳು ದುರಸ್ತಿ ಕಾಣದೆ ಅತಂತ್ರವಾಗಿರುವ ಬಗ್ಗೆ ಗ್ರಾಮಾಂತರದ ಎಲ್ಲೆಡೆ ಅಸಮಾಧಾನದ ಕೂಗು ಕೇಳಿಬರುತ್ತಿದೆ

ಕೆಲವೆಡೆಗಳಲ್ಲಂತೂ ಈ ರಸ್ತೆಗಳಿಗೆ 82 ರಿಂದಲೂ ರಿಪೇರಿಯಾಗಿಲ್ಲ ಎನ್ನಲಾಗಿದೆ. ಜಲ್ಲಿ ಹಾಕಿದ ಕಡೆಗಳಲ್ಲಿ ಜಲ್ಲಿಯೆಲ್ಲ ಎದ್ದು ಹೋಗಿ ಅಧ್ವಾನವಾಗಿದೆ

ಜಿ. ಪ. ಮತ್ತು ಮಂ ಪಂಚಾಯ್ತಿಗಳಿಗೆ ಸೇರಿದ ರಸ್ತೆಗಳಿಗೆ ಎಲ್ಲಾ ಕಡೆ ಈಗಾಗಲೇ ರಿಪೇರಿ ಕಾರ್ಯ ಮುಗಿದಿದೆ. ಆದರೆ ಒಂದು ರೀತಿ 'ಆಟಕ್ಕುಂಟು ಲೆಕ್ಕಕ್ಕಿಲ್ಲ' ಎಂಬಂಥ ತ್ರಿಶಂಕು ಸ್ಥಿತಿಯನ್ನು ಸ್ವತಃ ತಾನೇ ಅನುಭವಿಸುತ್ತಿರುವ ತಾಲ್ಲೂಕು ಪಂಚಾಯತ್ (ಹಿಂದಿನ ತಾ. ಅ. ಮಂಡಳಿಗಳಿಗೆ ಬದಲಿ)ಗಳ ರಸ್ತೆಗಳಿಗೆ ದಿಕ್ಕಿಲ್ಲದಂತಾಗಿದೆ.

ಹೊಸ ವ್ಯವಸ್ಥೆಯನ್ನು ಹೆರುವ ಸಂಭ್ರಮದಲ್ಲಿ, ಒಂದು ರೀತಿ 'ಉಪ ಉತ್ಪನ್ನ' (ಬೈ-ಪ್ರಾಡಕ್ಟ್)ದಂತಾಗಿರುವ ಈ ತಾಲ್ಲೂಕ್ ಪಂಚಾಯತ್ ವ್ಯವಸ್ಥೆಯ ಬೇಕು-ಬೇಡಗಳ ಬಗ್ಗೆ ಯಾರೂ ಗಮನ ಹರಿಸಿದಂತಿಲ್ಲ ಹೀಗಾಗಿ ಅದಕ್ಕೊಂದು ನಿರ್ದಿಷ್ಟ ಆಯ-ವ್ಯಯ ಮುಂಗಡ ಪತ್ರವಾಗಲಿ, ಅದರ ಕಾಮಗಾರಿಗಳ ಸ್ಪಷ್ಟ ಚಿತ್ರಣವಾಗಲಿ ತಯಾರಾಗದೆ ಈ ಪರಿಸ್ಥಿತಿ ಉಂಟಾಗಿದ್ದು, ಮಂಡಲ ಪಂಚಾಯ್ತಿಗಳವರು ತಮ್ಮ ವ್ಯಾಪ್ತಿಯಲ್ಲಿರುವ ಇಂಥ ರಸ್ತೆಗಳ ದುರಸ್ತಿಯ ಅಗತ್ಯಗಳ ಬಗ್ಗೆ ಕೂಡಲೇ ಸಮರ್ಪಕ ಅಂದಾಜುಗಳನ್ನು ಸಲ್ಲಿಸಿದರೆ 88-89ರ ಸಾಲಿಗಾದರೂ ಹಣ ಕಾಸಿನ ಏರ್ಪಾಡು ಮಾಡಿಕೊಳ್ಳಲು ಸಾಧ್ಯವಾಗಬಹುದೆಂದು ಕೊಪ್ಪ ಬಿಡಿಒ ರಾಮಮೂರ್ತಿ ತಿಳಿಸಿದ್ದಾರೆ.

### ವಂಚಕರಿದ್ದಾರೆ.....

(ಒಂದನೇ ಪುಟದಿಂದ)

ಸಿದ ಶ್ರೀನಿವಾಸಯ್ಯ ಹಣದ ಕವರು ಬಿಚ್ಚಿದಾಗ ಹೌಹಾರಿದರು. ಅದರಲ್ಲಿ ಹಣದ ಬದಲು ನೋಟಿನ ಆಕಾರಕ್ಕೆ ಕತ್ತರಿಸಿದ ಕಾಗದದ ತುಂಡುಗಳಿದ್ದವು!

ಇಂಥ ಬಡವರನ್ನೂ ದೋಚಿ ತಿನ್ನುತ್ತಾರಲ್ಲ ಎಂಬ ಸಂಕಟ ಒಂದು ಕಡೆಯಾದರೆ, ಈ ಕಾಲದಲ್ಲೂ ಇಷ್ಟು ಸಲೀಸಾಗಿ ಕುರಿಯಂತೆ ಮೋಸ ಹೋಗುತ್ತಾರಲ್ಲ ಎಂತಲೂ ಅನ್ನಿಸದಿರದು.

### ಧಾರ್ಮಿಕ ಸಂಸ್ಥೆಗಳ ಪ್ರತಿನಿಧಿಗಳ ಸಮ್ಮೇಳನ

ಹರಿಹರಪುರ : ಕೊಪ್ಪ ತಾ|| ಧಾರ್ಮಿಕ ಸಂಸ್ಥೆಗಳ ಪ್ರತಿನಿಧಿಗಳ ಸಮ್ಮೇಳನ ಇಲ್ಲಿ ಮಾ. 13 ರಂದು ಶಾಸಕರ ಅಧ್ಯಕ್ಷತೆಯಲ್ಲಿ ಇಲ್ಲಿನ ಮಠಾಧೀಶರ ಸಮ್ಮುಖದಲ್ಲಿ ನಡೆಯುತ್ತದೆ. ಸಚಿವ ಅಮರನಾಥ ಶೆಟ್ಟಿ ಉದ್ಘಾಟಿಸಿ, ಬಿ. ಎಲ್. ಶಂಕರ್ ಸಮಾರೋಪ ಮಾಡುತ್ತಾರೆ. ಜಿ. ಪ. ಅಧ್ಯಕ್ಷರು, ಸದಸ್ಯರು, ಜಿಲ್ಲಾಧಿಕಾರಿ ಮತ್ತಿತರರು ಅತಿಥಿಗಳಾಗಿರುತ್ತಾರೆ ಎಂದು ಸಮಿತಿಯ ಪ್ರಕಟಣೆ ತಿಳಿಸಿದೆ.

## ಟೆಲಿಫೋನ್ ಸಿಬ್ಬಂದಿಯ ಅನಿರ್ದಿಷ್ಟ ಚಳುವಳಿ ?

ಕೊಪ್ಪ : ಟೆಲಿಫೋನ್ ಇಲಾಖೆಯ ಎಲ್ಲಾ ವರ್ಗಗಳ ನೌಕರರು ಭಾನುವಾರ ಮಧ್ಯರಾತ್ರಿಯಿಂದ ಅನಿರ್ದಿಷ್ಟ ಕಾಲದ 'ಟೂಲ್ ಡೌನ್' ಚಳುವಳಿ ಆರಂಭಿಸಿರುವುದಾಗಿ ತಿಳಿದುಬಂದಿದೆ.

ಕಳೆದ ವಾರ ಈ ಇಲಾಖೆಯ ತಂತ್ರಜ್ಞರ ಚಳುವಳಿಯ ನಂತರ ಅವರ ಬೇಡಿಕೆಗಳ ಬಗ್ಗೆ ಸರ್ಕಾರ ಒಪ್ಪಂದಕ್ಕೆ ಬಂದಿದ್ದು, ಇಂಥ ಒಪ್ಪಂದದ ವೇಳೆ, ಇಲಾಖೆಯ ಎಲ್ಲ ವರ್ಗಗಳ ಸಿಬ್ಬಂದಿ ವರ್ಗದವರ ಬೇಡಿಕೆಗಳನ್ನು ಅವರ ಚಳುವಳಿಗೆ ಕಾಯದೆ ಪರಿಶೀಲಿಸಿ ಬಗೆಹರಿಸಬೇಕೆಂಬ ನೌಕರರ ಬೇಡಿಕೆಗೆ ಮಾನ್ಯತೆ ಸಿಕ್ಕಿಲ್ಲವೆನ್ನಲಾಗಿದೆ.

ತಂತ್ರಜ್ಞರು ಮಾತ್ರವಲ್ಲದೆ ಇನ್ನೂ ಹಲವು ವರ್ಗಗಳ ನೌಕರರು ತೀವ್ರ ಅತಂತ್ರ ಸ್ಥಿತಿಗೆ ಅಥವಾ ಮುಗ್ಗಟ್ಟಿಗೆ ಸಿಕ್ಕಿದ್ದು, 'ಚಳುವಳಿಗೆ ಇಳಿದವರಿಗೆ ಮಾತ್ರ ಪರಿಹಾರ' ಎಂಬಂಥ ಸರ್ಕಾರದ ಧೋರಣೆಯಿಂದಾಗಿ ತಾವೂ ಚಳುವಳಿ ಮಾರ್ಗ ಹಿಡಿಯುವುದು ಅನಿವಾರ್ಯವಾಗಿದೆ ಎಂದು ನೌಕರರ ಸಂಘದ ಮೂಲಗಳು ಹೇಳಿವೆ

## ಸಿಬ್ಬಂದಿಯ ದುರಹಂಕಾರ

(3ನೇ ಪುಟದಿಂದ)

ಎಂದು ಜೋರಿನಿಂದ ಕೇಳಿರುವುದಾಗಿಯೂ, ಸಿಬ್ಬಂದಿಯವರು 'ನೀವೇ ಅಧಿಕಾರಿಗಳ ಕೊಠಡಿಗೆ ಹೋಗಿ ನೋಡಿ ಬಂದಿದ್ದೀರಲ್ಲಾ ಇದ್ದರೆ ಅಲ್ಲೇ ಇರಬೇಕಷ್ಟೆ? ಸರಿಯಾಗಿ ನೋಡಲಿಲ್ಲವೆ? ಬೇಕಾದರೆ ಇನ್ನೊಮ್ಮೆ ನೋಡಿ" ಎಂದರಂತೆ ಅಷ್ಟೆ. ಅವರು ಪುನಃ ನೋಡಿ ಬಂದು, "ಎಲ್ಲಿಗೆ ಹೋಗಿದ್ದಾರೆ ಎಂದು ಕೇಳಿದ್ದು" ಎಂದೆನ್ನುತ್ತಾ "ಇರಲಿ, 20 ಅಂಶಗಳ ಸಭೆಯಲ್ಲಿ ಶಾಸಕರಿಗೆ ಹೇಳುತ್ತೇನೆ" ಎಂದು ಹೇಳಿ ಕಛೇರಿಯಿಂದ ಹೊರಟು ಹೋದರಂತೆ. ಇಷ್ಟೆ ನಡೆದ ವಿಷಯವೆಂದು ಎಲ್ಲಾ ಸಿಬ್ಬಂದಿಯವರಿಂದಲೂ ತಿಳಿಯಿತು.

ಆ ಸಮಯದಲ್ಲಿ ಅವರಾಗಲಿ ನಮ್ಮ ಕಛೇರಿ ಸಿಬ್ಬಂದಿಯಾಗಲಿ ಯಾವ ಅವಾಚ್ಯ ಶಬ್ದಗಳನ್ನು ಉಪಯೋಗಿಸಿ ಮಾತನಾಡಿರುವುದಿಲ್ಲವೆಂದೂ, ಅವರು ಹೆಚ್ಚು ಸಮಯ ಕಛೇರಿಯಲ್ಲಿ ನಿಲ್ಲದೆ ಹೊರಟು ಹೋಗಿರುವುದರಿಂದ ಹೆಚ್ಚಿನ ಮಾತಿಗೆ ಅವಕಾಶವೇ ಇಲ್ಲದಿರುವುದು ತಿಳಿಯಿತು.

ಆದುದರಿಂದ ಅವರು ಸೃಷ್ಟಿಸಿದ ಹೆಚ್ಚಿನ ಮಾತುಗಳು ಸತ್ಯಕ್ಕೆ ದೂರವಾದವುಗಳೆಂದು ಸ್ಪಷ್ಟಪಡಿಸುತ್ತೇನೆ.

ಅಲ್ಲದೆ, ಈ ಕಛೇರಿಯ ಸಿಬ್ಬಂದಿ ಬಗ್ಗೆ ಈವರೆವಿಗೂ ಸಾರ್ವಜನಿಕರಿಂದ ಇಂಥ ಯಾವ ದೂರುಗಳೂ ಬಂದಿಲ್ಲವೆಂಬುದನ್ನು ಈ ಸಂದರ್ಭದಲ್ಲಿ ಸ್ಮರಿಸಬಯಸುತ್ತೇನೆ.

—ಸ|| ಕಾ|| ನಿ|| ಇಂಜಿನಿಯರ್,

## ಜಿ. ಪ. ಅಧ್ಯಕ್ಷರಿಗೆ ಮನವಿ

(3ನೇ ಪುಟದಿಂದ)

ಈ ರಸ್ತೆ ಮುಂದುವರಿಸುವುದರಿಂದ ಸುಮಾರು ಹದಿನೈದು ಕುಟುಂಬಗಳಿಗೆ (ಒಂದು ಹರಿಜನ ಕಾಲೋನಿ ಸೇರಿ) ಮತ್ತು ಒಂ.ರ. ಶಾಲೆಯ ಸಂಪರ್ಕಕ್ಕೆ ಬಹಳ ಅನುಕೂಲವಾಗುತ್ತದೆ.

—ಗ್ರಾಮಸ್ಥರು, ಮಲಗಾರು
(24 ಜನರ ಸಹಿಗಳಿವೆ)

### ಅಡಿಕೆ ಧಾರಣೆ

**ಶಿವಮೊಗ್ಗ 4-3-1988**
ಸರಕು 3800 – 4410
ಬೆಟ್ಟೆ 2411 – 3009
ಗೊರಬಲು : 700 – 1211
(ಚಾವಲ್ಮನೆ ಸತೀಶ್)

**ಸಾಗರ 4-3-1988**
ಆಪಿ : 3500 – 4500
ಚಾಲಿ : 1120 – 1435
ಸಿಪ್ಪೆಗೋಟು : 279 – 590
ಇಡಿ : 1301 – 1809

### ಏಲಕ್ಕಿ ಧಾರಣೆ

**ಸಕಲೇಶಪುರ 27.2.1988**
ಸರಾಸರಿ : 134 - 158
ಸಿರ್ಸಿ – ಸಿದ್ದಾಪುರ
150–160

**ಮಂಗಳೂರು 4.3.1988**
ಏಲಕ್ಕಿ : 120 – 140
ಕಾಳು ಮೆಣಸು : 3974 – 4004



## ಸ್ತಬ್ಧಗೊಂಡ ಹೈನುಗಾರಿಕೆ : ಸಂಕಷ್ಟದಲ್ಲಿ ಹಾಲು ಉತ್ಪಾದಕರು

(1ನೇ ಪುಟದಿಂದ)

ಟರಿಗೆ ರೂ 3.80 ವೆಚ್ಚ ಮಾಡಬೇಕಾಗುತ್ತಿತ್ತು ಇದನ್ನೆಲ್ಲ ಕೂಲಂಕಷವಾಗಿ ಅಧಿಕಾರಿಗಳೊಂದಿಗೆ ಚರ್ಚಿಸಿ ತಾತ್ಕಾಲಿಕವಾಗಿ ಹಾಲಿನ ಸಂಗ್ರಹಣೆ ನಿಲ್ಲಿಸಲಾಗಿದೆ.

ಈ ದಿಶೆಯಲ್ಲಿ ಬಾಳೆಹೊನ್ನೂರು ಶೀತಲೀಕರಣ ಕೇಂದ್ರವನ್ನು 2000 ಲೀಟರುಗಳ ಸಾಮರ್ಥ್ಯಕ್ಕೆ ಹೆಚ್ಚಿಸಿ ಪುನಃ ಹಾಲು ಸಂಗ್ರಹಿಸುವ ಎಲ್ಲ ಪ್ರಯತ್ನಗಳನ್ನು ಮಾಡುತ್ತಿದ್ದೇವೆ. ಹಾಗೂ ಈ ಕಾರ್ಯಕ್ಕಾಗಿ ಒಬ್ಬ ವಿಸ್ತರಣಾಧಿಕಾರಿಯನ್ನು ಬಾಳೆಹೊನ್ನೂರು ಕಾರ್ಯವ್ಯಾಪ್ತಿಗೆ ಕಳುಹಿಸಲಾಗಿದ್ದು ಇನ್ನೂ ಹೆಚ್ಚಿನ ಸಂಘಗಳ ನಿರ್ಮಾಣ ಮಾಡುವ ವ್ಯವಸ್ಥೆ ಮಾಡಿದ್ದೇವೆ.

ಹೀಗೆ ಅವರು ಕಳಿಸಿರುವ ವಿಸ್ತರಣಾಧಿಕಾರಿ ಹಾಲುತ್ಪಾದಕರ ಯಾವ ಸಂಘಕ್ಕೂ ಭೇಟಿ ಕೊಟ್ಟಿರುವುದು ಕಂಡು ಬರುತ್ತಿಲ್ಲ. ಹಾಲು ಸಂಗ್ರಹಣೆ ಪುನಃ ಯಾವಾಗ ಆದೀತೆಂಬ ಬಗ್ಗೆ ಯಾವ ಖಚಿತ ವರ್ತಮಾನವೂ ದೊರೆಯುತ್ತಿಲ್ಲ.

ಈ ಮಧ್ಯೆ ಹಾಲುತ್ಪಾದಕರಿಗಾಗಲಿ; ಈ ಭಾಗದ ಮುಖಂಡರಿಗಾಗಲಿ ಯಾವ ಸುಳಿವೂ ಕೊಡದೆ ಇಲ್ಲಿನ ಹೈನುಗಾರಿಕೆ ಸಾಧ್ಯತೆಯ ಬೆನ್ನಲ್ಲಿ ಚೂರಿ ಇರಿಯುವಂಥ ಕೃತ್ಯವೊಂದು ಒಕ್ಕೂಟದಿಂದ ಹಿಂದೆಯೇ ನಡೆದುಹೋಗಿದೆ. ಬಾಳೆಹೊನ್ನೂರಿನಲ್ಲಿ ಸ್ಥಾಪನೆಯಾಗಬೇಕಾಗಿದ್ದ ಹಾಲು ಶೈತ್ಯೀಕರಣ ಸ್ಥಾವರವನ್ನು ಸಂಪೂರ್ಣವಾಗಿ ಬೇರೆಡೆಗೆ ವರ್ಗಾಯಿಸಿ, ಇಲ್ಲಿ ಕೇವಲ ನಾಮಕಾವಾಸ್ತೆ ಶೈತ್ಯೀಕರಣದ ವ್ಯವಸ್ಥೆ ಮಾಡಿರುವುದೇ ಆ ಕೃತ್ಯ. ಇಲ್ಲಿ ಈಗ 'ಕ್ಯಾನ್ ಕೂಲರ್' ಎಂಬ ಸಾಧನದಿಂದ, ಕ್ಯಾನ್‌ನಲ್ಲಿರುವ ಹಾಲನ್ನು ಸುಮಾರು 10 ಡಿಗ್ರಿಯಷ್ಟು ಮಾತ್ರ ತಂಪು ಮಾಡಲು ಸಾಧ್ಯವಾಗುತ್ತಿದೆ. ಬೇರಾವ ಬಗೆಯ ಶೈತ್ಯೀಕರಣವೂ ಇಲ್ಲಿ ನಡೆಯುತ್ತಿಲ್ಲ ಎಂಬುದು ಬಹುಶಃ ಹಾಲುತ್ಪಾದಕರಿಗೆ ದಿಗ್ಭ್ರಮೆ ಹಿಡಿಸಬಹುದಾದ ಸಂಗತಿಯಾಗಿದೆ.

ಇಂಥ ಪರಿಸ್ಥಿತಿಯಲ್ಲಿ, ಸಾಲ-ಸೋಲ ಮಾಡಿ ಹಸುಗಳನ್ನು ಕಟ್ಟಿದವರು, ಡೈರಿ ಒಕ್ಕೂಟವನ್ನೇ ನೆಚ್ಚಿದವರು ಇಂದು ತಮ್ಮ ಸಾಲಗಳ ಕಂತು ಕಟ್ಟುವ ಮಾತು ಹಾಗಿರಲಿ, ಉತ್ಪತ್ತಿಯಾದ ಹಾಲಿಗೂ ಒಂದು ಗತಿ ಕಾಣಿಸಲಾಗದೆ ತಮ್ಮ ಜೀವನ ನಿರ್ವಹಣೆಗೇ ಕುತ್ತು ತಂದುಕೊಂಡಂತಾಗಿದೆ.

ಇವರೆಲ್ಲ ಬೇಸತ್ತು ತಮ್ಮ ಹಸುಗಳನ್ನು ಮಾರುವ ಮೊದಲು ಸಹಕಾರ ಸಂಘಗಳ ಮತ್ತು ಹಾಲು ಸಂಗ್ರಹಣೆಯ ಪುನರಾರಂಭಕ್ಕೆ ಹಾಗೂ ಶೈತ್ಯೀಕರಣ ಕೇಂದ್ರದ ಅಭಿವೃದ್ಧಿಯ ಬಗ್ಗೆ ಕೊಟ್ಟ ಭರವಸೆಯನ್ನು ತ್ವರಿತವಾಗಿ ಕಾರ್ಯಗತಗೊಳಿಸುವುದಕ್ಕೆ ಹಾಸನ ಡೈರಿ ಒಕ್ಕೂಟದ ಪ್ರಭುಗಳು ತುರ್ತಾಗಿ ಈಗಲಾದರೂ ಗಮನ ನೀಡಬೇಕಿದೆ.



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್, ಅಚ್ಚು : ದೀಪಿಕೆ ಅಚ್ಚುಕೂಟ, ಕೊಪ್ಪ